# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | : | 2123 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿ |
| ಉತ್ತರಿಸಬೇಕಾದ ದಿನಾಂಕ | : | 17-03-2022 |

| | ಪ್ರಶ್ನೆ | ಉತ್ತರ |
|---|---|---|
| (ಅ) | ಅನುದಾನಿತ ಶಿಕ್ಷಣ ಸಂಸ್ಥೆಗಳಿಂದ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಆರ್ಥಿಕ ಮಿತವ್ಯಯ ಆದೇಶವನ್ನು ಹೊರಡಿಸಿರುವುದು ಯಾವಾಗ. | ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ರಾಜಸ್ವ ಸಂಗ್ರಹಣೆಯಲ್ಲಿ ತೀವ್ರ ಕುಸಿತ ಉಂಟಾಗಿದ್ದುದರಿಂದ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಮತ್ತು ಇದಕ್ಕಾಗಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವುದು ಅನಿವಾರ್ಯವಾಗಿದ್ದುದರಿಂದ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಮತ್ತು ವೇತನಾನುದಾನಕ್ಕೆ ಒಳಪಡಿಸುವ ಕುರಿತಂತೆ ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8/2020, ದಿನಾಂಕ:10-06-2020ರನ್ವಯ ನಿರ್ಬಂಧ ವಿಧಿಸಿ ಸೂಚನೆಗಳನ್ನು ನೀಡಲಾಗಿರುತ್ತದೆ. |
| (ಆ) | ಈ ಆರ್ಥಿಕ ಮಿತವ್ಯಯ ಆದೇಶವನ್ನು ಸಂಪೂರ್ಣವಾಗಿ ಹಿಂಪಡೆಯಲಾಗಿದೆಯೇ: ಇಲ್ಲದಿದ್ದಲ್ಲಿ ಸಡಿಲಗೊಳಿಸಿದೆಯೇ: ಸಡಿಲಿಕೆ ಅಂಶಗಳ ವಿವರದೊಂದಿಗೆ ಮಾಹಿತಿ ಒದಗಿಸುವುದು. | ಆರ್ಥಿಕ ಮಿತವ್ಯಯ ಆದೇಶವನ್ನು ಸಂಪೂರ್ಣವಾಗಿ ಹಿಂಪಡೆದಿರುವುದಿಲ್ಲ. ಆದಾಗ್ಯೂ, ಶೈಕ್ಷಣಿಕ ಹಿತದೃಷ್ಟಿ ಮತ್ತು ಅಭ್ಯರ್ಥಿಗಳ ವಯೋಮಿತಿ ಮೀರುವುದನ್ನು ಪರಿಗಣಿಸಿ, ಖಾಸಗಿ ಅನುದಾನಿತ ಪ್ರೌಢಶಾಲೆ, ಪದವಿಪೂರ್ವ ಮತ್ತು ಪದವಿ ಕಾಲೇಜುಗಳಲ್ಲಿ ದಿನಾಂಕ:31-12-2015ರ ಅಂತ್ಯಕ್ಕೆ ನಿವೃತ್ತಿ, ಮರಣ, ರಾಜೀನಾಮೆ ಇತರೆ ಕಾರಣಗಳಿಂದ ಖಾಲಿ ಉಂಟಾಗಿರುವ ಹುದ್ದೆಗಳ ಪೈಕಿ ಈಗಾಗಲೇ ಸರ್ಕಾರದಿಂದ ಅನುಮೋದನೆಗೊಂಡು ನೇಮಕಾತಿ ಪ್ರಕ್ರಿಯೆಯು ಇಲಾಖೆಯಲ್ಲಿ ಅಂತಿಮ ಹಂತದಲ್ಲಿ ಬಾಕಿ ಇರುವ ಕ್ರಮವಾಗಿ 257, 173, ಮತ್ತು 371ಬೋಧಕ ಹುದ್ದೆಗಳಿಗೆ ನೇಮಕಾತಿ ಆದೇಶವನ್ನು 2021-22ನೇ ಶೈಕ್ಷಣಿಕ ವರ್ಷ ಪ್ರಾರಂಭಗೊಂಡ ನಂತರ ನೀಡಲು ಸಹಮತಿಸಲಾಗಿರುತ್ತದೆ. |
| (ಇ) | ಅನೇಕ ಉದ್ಯೋಗಾಂಕ್ಷಿಗಳು ಈ ಆರ್ಥಿಕ ಮಿತವ್ಯಯದ ಆದೇಶದಿಂದ ವಯೋಮಿತಿಯನ್ನು ಮೀರಿ ಉದ್ಯೋಗ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | |

ಸಂಖ್ಯೆ: ಆಇ 220 ವೆಚ್ಚ-8/2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ